

# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## ಚುಕ್ಕೆ ರಹಿತ ಪ್ರಶ್ನೆ

ದಿನಾಂಕ : 31-03-2021 ಪ್ರಶ್ನೆ ಸಂಖ್ಯೆ : 3056 (2499)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ನಸೀರ್ ಅಹ್ಮದ್ (ವಿಧಾನಸಭೆಯಿಂದ ಚುನಾಯಿತರಾದವರು)

ಉತ್ತರ ನೀಡಬೇಕಾದ ದಿನಾಂಕ : 31-03-2021

ಉತ್ತರಿಸುವ ಸಚಿವರು: ಕಂದಾಯ ಸಚಿವರು

ವಿಷಯ : ಹೊಸಕೋಟೆ ತಾಲ್ಲೂಕಿನ ತಹಶೀಲ್ದಾರ್‌ರವರು ಅಧಿಕಾರ ದುರುಪಯೋಗ ಪಡಿಸಿಕೊಂಡಿರುವ ಬಗ್ಗೆ

(ಅ) ಹೊಸಕೋಟೆ ತಾಲ್ಲೂಕಿನ ತಹಶೀಲ್ದಾರ್‌ರವರು ಅಧಿಕಾರ ದುರುಪಯೋಗ ಪಡಿಸಿಕೊಂಡು ಸರ್ಕಾರಿ ಗೋಮಾಳ ಜಮೀನು ಹಾಗೂ ಹಿಡುವಳೀ ಜಮೀನುಗಳನ್ನು ನಿಯಮ ಬಾಹಿರವಾಗಿ ಖಾತೆ ವರ್ಗಾಯಿಸುತ್ತಿರುವ ಕುರಿತು ದೂರು ದಾಖಲಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ಹೌದಾದಲ್ಲಿ, ಯಾವ ಯಾವ ಗೋಮಾಳ ಹಾಗೂ ಹಿಡುವಳಿ ಜಮೀನುಗಳನ್ನು ನಿಯಮ ಬಾಹಿರವಾಗಿ ಖಾತೆ ವರ್ಗಾಯಿಸಿರುವ ಕುರಿತು ದೂರು ದಾಖಲಾಗಿವೆ;(ಪ್ರಕರಣವಾರು ಮಾಹಿತಿ ಒದಗಿಸುವುದು)

(ಇ) ಸದರಿ ತಹಶಿಲ್ದಾರ್‌ರವರ ಅಧಿಕಾರ ದುರುಪಯೋಗಕ್ಕೆ ಸಂಬಂಧಿಸಿದಂತೆ ಜಿಲ್ಲಾಧಿಕಾರಿ ಬೆಂಗಳೂರು ಗ್ರಾಮಾಂತರ ಜಿಲೆ ಇವರು ದಿನಾಂಕ:27.10.2020 ರಂದು ಸರ್ಕಾರಕ್ಕೆ ವರದಿ ಮಾಡಿದರೂ ಈವರೆವಿಗೂ ಸರ್ಕಾರ ಯಾವುದೇ ಕ್ರಮ ಕೈಗೊಳ್ಳದಿರಲು ಕಾರಣವೇನು;

(ಈ) ಯಾವ ಕಾಲಮಿತಿಯೊಳಗೆ ಸದರಿ ತಹಶೀಲ್ದಾರ್ ರವರ ವಿರುದ್ಧ ಕ್ರಮ ಕೈಗೊಳ್ಳಲಾಗುವುದು?